ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ





# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

| ಸಂಪುಟ: ೦೨ ಸಂಚಿಕೆ: ೧೦ | ಜನವರಿ ೨೦೧೬ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 02 Issue 10 | January 2016 | Pages - 8 | A. Sub. - Rs. 20/- | Editor : Sri. B.R. Ravindranath |





**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/–**
**ಐದು ವರ್ಷಗಳ ಚಂದಾ**
**ರೂ. ೧೦೦/–**



ವಿಳಾಸ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
**ಸ್ಥಾಪನೆ : ೦೬–೦೫–೧೯೭೯**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೪೭೭, ೨೬೬೭೬೭೭೩
ಇಮೇಲ್ : bmsritrust@gmail.com


## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನವೆಂಬರ್–ಡಿಸೆಂಬರ್2015 ತಿಂಗಳಲ್ಲಿ ನಡೆದ ಕಾರ್ಯಕ್ರಮಗಳು

ದಿನಾಂಕ : 26–11–2015 ಗುರುವಾರ ಸಂಜೆ 6ಕ್ಕೆ

**ತೀ.ನಂ.ಶ್ರೀ. ಸ್ಮಾರಕ ವಿಶೇಷ ಉಪನ್ಯಾಸ**

ಆಚಾರ್ಯ ಪಾಠ ಶಾಲಾ ಕಾಲೇಜಿನ ನಿವೃತ್ತಸಂಸ್ಕೃತ ಪ್ರಾಧ್ಯಾಪಕರೂ ಸುಪ್ರಸಿದ್ಧ ವಿಮರ್ಶಕರೂ ಆದ ಡಾ. ಬಿ.ಎನ್. ಸುಮಿತ್ರಾಬಾಯಿಯವರು . ಸಂಸ್ಕೃತ ನಾಟಕಗಳ ವಿಮರ್ಶೆ–ತೀ.ನಂ.ಶ್ರೀ. ಅವರ ದೃಷ್ಟಿ ಎಂಬ ವಿಷಯವನ್ನು ಕುರಿತು ವಿಶೇಷ ಉಪನ್ಯಾಸವನ್ನು ನೀಡಿದರು. ತೀ.ನಂ.ಶ್ರೀ ಅವರ ಕಾಳಿದಾಸನ ಶಾಕುಂತಲ ನಾಟಕ ಮತ್ತು ವಿಕ್ರಮೋರ್ವಶೀಯ ನಾಟಕಗಳ ವಿಮರ್ಶೆಯನ್ನು ಮಾಡುವಾಗ ಅನುಸರಿಸುವ ವಿಧಾನಗಳು ಅಚ್ಚರಿಯನ್ನು ಮೂಡಿಸುತ್ತವೆ, ಅವರ ಸೃಜನಶೀಲಶಕ್ತಿಯನ್ನು ಎಷ್ಟು ಕೊಂಡಾಡಿದರೂ ಸಾಲದು! ಅವರ ಸರಳಭಾಷಾ ಬಳಕೆಯ ವಿಧಾನ ಮನಮೆಚ್ಚುವಂತಿದೆ; ಕೆಲವು ಕಡೆ ಅವರ ವಾದವನ್ನೂ ಒಪ್ಪದಿರಬಹುದು ಎಂದು ತಮ್ಮ ಉಪನ್ಯಾಸದಲ್ಲಿ ಹೇಳಿದರು.

ಎಂ.ಇ.ಎಸ್. ಕಾಲೇಜಿನ ಸಂಸ್ಕೃತ ಪ್ರಾಧ್ಯಾಪಕರೂ ರಂಗಕರ್ಮಿಗಳೂ ಸುಪ್ರಸಿದ್ಧ ವಿಮರ್ಶಕರೂ ಆದ ಡಾ.ಜೆ. ಶ್ರೀನಿವಾಸಮೂರ್ತಿಗಳ ಸಮಾರಂಭದಲ್ಲಿ ಅಧ್ಯಕ್ಷತೆಯನ್ನೂ ವಹಿಸಿದ್ದರು. ಡಾ.ಬಿ.ಎನ್. ಸುಮಿತ್ರಾ ಬಾಯಿಯವರು ಕೆಲವು ಅಭಿಪ್ರಾಯಗಳನ್ನು ಒಪ್ಪಿಕೊಳ್ಳುವುದರ ಮೂಲಕ ಶ್ರೀಯುತರು ಸಂಸ್ಕೃತ ನಾಟಕಗಳ ಬಗ್ಗೆ ದೀರ್ಘ ಉಪನ್ಯಾಸವನ್ನೇ ಮಾಡಿದ್ದು ಹೆಚ್ಚುಗಾರಿಕೆಯ ವಿಷಯವಾಗಿದೆ! ಅಧ್ಯಕ್ಷ ಭಾಷಣ ಅನೇಕ ಹೊಸ ವಿಷಯಗಳನ್ನು ಒಳಗೊಂಡಿತ್ತು.

ಡಾ. ಬಿ.ಸಿ.ರಾಜಕುಮಾರ್ ಮತ್ತು ಪ್ರೊ.ಪಿ.ವನಜ ಅವರು ವಿಶೇಷ ಉಪನ್ಯಾಸಕ್ಕೆ ಸಂವಾದ ರೂಪದಲ್ಲಿ ವಿಶೇಷ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸಿದ್ದು ಅರ್ಥಪೂರ್ಣವಾಗಿದೆ.ಡಾ. ಪಿ.ವಿ. ನಾರಾಯಣ ಮತ್ತು ಪ್ರೊ. ಎಂ.ಎಚ್. ಕೃಷ್ಣಯ್ಯ, ಉಪಸ್ಥಿತರಿದ್ದರು



## ಸಂಪಾದಕೀಯ

ಹೊಂಗನಸು ಓದುಗರಿಗೆ ಹೊಸ ವರ್ಷದ ಶುಭಾಶಯಗಳು.

ಪ್ರತಿ ವರ್ಷದಂತೆ ಈ ವರ್ಷದ ಪ್ರಾರಂಭದಲ್ಲಿ ಜನವರಿ 3ನೇ ತೇದಿಯಂದು ಪ್ರತಿಷ್ಠಾನ ಕೊಡಮಾಡುವ ಪ್ರತಿಷ್ಠಿತ ಶ್ರೀ ಸಾಹಿತ್ಯ ಪ್ರಶಸ್ತಿಯನ್ನು ಜನಪ್ರೀಯ ದಲಿತ ಕವಿ ಎಂದು ಹೆಚ್ಚು ಪ್ರಸಿದ್ಧರಾಗಿರುವ ಡಾ.ಸಿದ್ಧಲಿಂಗಯ್ಯ ಅವರಿಗೆ ನೀಡಲಾಗುತ್ತದೆ. ಈ ಕಾರ್ಯಕ್ರಮ ನಮ್ಮ ಪ್ರತಿಷ್ಠಾನದ ಪ್ರಮುಖ ಕಾರ್ಯಕ್ರಮವಾಗಿರುತ್ತದೆ. ಈ ಪ್ರಶಸ್ತಿಯನ್ನು ಸ್ಥಾಪಿಸಿರುವ ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ಅವರಿಗೆ ಮತ್ತೊಮ್ಮೆ ನಮ್ಮ ಕೃತಜ್ಞತೆಗಳು.

ಡಾ. ಸಿದ್ಧಲಿಂಗಯ್ಯ ಅವರಿಗೆ ನಮ್ಮೆಲ್ಲರ ಅಭಿನಂದನೆಗಳು.

**ಬಿಆರ್ ರವೀಂದ್ರನಾಥ್**
ಸಂಪಾದಕರು

## ಶ್ರದ್ಧಾಂಜಲಿ



ಸ್ವಾತಂತ್ರ್ಯ ಹೋರಾಟಗಾರ ತಿರುಮಲೆ ತಾತಾಚಾರ್ಯ ಶರ್ಮಾ ಅವರ ಪುತ್ರ ತಿರುಮಲೆ ಶ್ರೀರಂಗಾಚಾರ್ಯ (90) ಅವರು 4–12–2015 ರಂದು ನಿಧನರಾದರು. ತಮಿಳುನಾಡಿನ ತಿರುವಣ್ಣಾಮಲೈ ಬಳಿ ಅಕ್ಟೋಬರ್‌ನಲ್ಲಿ ಸಂಭವಿಸಿದ್ದ ಕಾರು ಅಪಘಾತದಲ್ಲಿ ಗಾಯಗೊಂಡಿದ್ದ ಅವರು, ನಗರದ ಖಾಸಗಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದರು.

ಕರ್ನಾಟಕ ಲೇಖಕರ ಸಂಘದ ಅಧ್ಯಕ್ಷರಾಗಿದ್ದ ಅವರು, ಇತಿಹಾಸ ತಜ್ಞರಾಗಿದ್ದರು. ಕಲಾ ವಿಮರ್ಶಕ ಹಾಗೂ ವಾಗ್ಮಿಯಾಗಿಯೂ ಹೆಸರು ಮಾಡಿದ್ದರು.

ಬಿ.ಎಂ.ಶ್ರೀ. ಪ್ರತಿಷ್ಠಾನವು ತಿರುಮಲೆ ಶ್ರೀರಂಗಾಚಾರ್ಯ ಅವರಿಗೆ ಶ್ರದ್ಧಾಂಜಲಿ ಅರ್ಪಿಸುತ್ತದೆ.

### ಬಿಎಂಶ್ರೀ ಕಲಾ ಭವನ

150 ಜನರಿಗೆ ಸ್ಥಳಾವಕಾಶ ಧ್ವನಿ, ಬೆಳಕು, ಪ್ರೊಜೆಕ್ಟರ್ ಸೌಲಭ್ಯಗಳು ಇರುವ ಬಿಎಂಶ್ರೀ ಕಲಾ ಭವನ ಸಾಹಿತ್ಯ – ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಲಭ್ಯವಿದೆ.ಉಪನ್ಯಾಸ, ವಿಚಾರಗೋಷ್ಠಿ, ಪುಸ್ತಕ ಬಿಡುಗಡೆ, ಕವಿಗೋಷ್ಠಿ, ಸಭೆ, ಸಂವಾದ, ಸಂಗೀತ, ನೃತ್ಯ, ಮುಂತಾದ ವೈವಿಧ್ಯಮಯ ಕಾರ್ಯಕ್ರಮಗಳಿಗೆ ಸಾಹಿತ್ಯಾಸಕ್ತರು, ಸಂಘ ಸಂಸ್ಥೆಗಳು ಪಡೆಯಬಹುದು. ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿ.

### ಸದಸ್ಯರ ಗಮನಕ್ಕೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಎಲ್ಲಾ ಸದಸ್ಯರ ವಿಳಾಸಗಳನ್ನು ಖಚಿತಪಡಿಸಿಕೊಂಡು ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ಪರಿಷ್ಕೃತ ವಿಳಾಸ ಮಾಹಿತಿಗಳನ್ನು ಡಿಜಿಟಲೀಕರಿಸುವ ಕೆಲಸವನ್ನು ಪ್ರಾರಂಭ ಮಾಡಿರುತ್ತದೆ. ಇದರಿಂದ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಹೆಚ್ಚಿನ ದಕ್ಷತೆ ಹಾಗೂ ಮಿತವ್ಯಯ ಸಾಧಿಸಲು ಸಾಧ್ಯವಿರುತ್ತದೆ.ಪ್ರತಿಷ್ಠಾನದ ಎಲ್ಲಾ ಸದಸ್ಯರೂ ತಮ್ಮ ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ವಿಳಾಸಗಳನ್ನು ಪ್ರತಿಷ್ಠಾನದ ಕಚೇರಿಗೆ ಈ ಕೆಳಕಂಡ ಯಾವುದೇ ರೀತಿಯಲ್ಲಿ ತಲುಪಿಸಬೇಕೆಂದು ಕೋರುತ್ತೇವೆ:

1. ಒಂದು ಪೋಸ್ಟ್ ಕಾರ್ಡ್ ನಲ್ಲಿ ಎಲ್ಲಾ ವಿವರಗಳನ್ನು ಬರೆದು ಕಳುಹಿಸುವುದು

2. ಪ್ರತಿಷ್ಠಾನದ ಈ ಮೈಲ್ ವಿಳಾಸಕ್ಕೆ ಎಲ್ಲಾ ವಿವರಗಳನ್ನು ಕಳುಹಿಸುವುದುಛಟಡುಣಡಿಣಾಣ@ರಟಚುಟ.ಛಿಂಟ

3. ಪ್ರತಿಷ್ಠಾನದ ಕಚೇರಿಗೆ ದೂರವಾಣಿ ಕರೆ ಮಾಡಿ ವಿವರಗಳನ್ನು ನೀಡುವುದು 080 26615877

4. ಪ್ರತಿಷ್ಠಾನದ ಕಚೇರಿಗೆ ಭೇಟಿ ನೀಡಿದಾಗ ವಿವರಗಳನ್ನು ನೀಡುವುದು

### ಆಧುನಿಕ ವಚನಗಳು

**–ಜಿ. ಅಬ್ದುಲ್ ಬಷೀರ್**

ಬಾಯಲ್ಲಿ ಹಿತ, ಮನದಲ್ಲಿ ಕುಪಿತರಂತೆ
ನನ್ನನ್ನು ಇಡದಿರಯ್ಯಾ!
ವಿಶ್ವವನ್ನ ಅನೀತಿಯತ್ತ ಸೆಳೆಯಲೆತ್ನಿಸಿದರೂ
ನಾನು ನಾನೇ ಆಗಿರುವಂತೆ ಮಾಡಯ್ಯಾ ಎನ್ನ ತಂದೆ
ಅಯ್ಯಾ ನಾ ನನ್ನ ಸಿರಿಯ ಬಯಸೆನು
ನಿನ್ನ ನೆನಪೇ ಎನಗೆ ಸ್ವರ್ಗ ಸುಖ
ಮತ್ತೊಂದು ಸ್ವರ್ಗವ ನನೇಕೆ ಬಯಸಲಿ ಅಯ್ಯಾ!
ಎನ್ನ ಉಸಿರಿರುವನ್ನ ನನ್ನತ್ತಲೇ
ಎನ್ನ ಧ್ಯಾನ ಹರಿವಂತೆ ಮಾಡು
ದೀನ ದಯಾಳು 'ಅಲ್ಲಾರಖಾ'. ॥2॥

# ಜನವರಿ 2016ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು



**03–01–2016 ಭಾನುವಾರ**

"ಶ್ರೀ ಸಾಹಿತ್ಯ ಪ್ರಶಸ್ತಿ ಪ್ರದಾನ"ಡಾ॥ ಸಿದ್ಧಲಿಂಗಯ್ಯ ಅವರಿಗೆ

ಪ್ರಶಸ್ತಿ ಪ್ರದಾನ : ನಾಡೋಜಿ ಹಂಪ ನಾಗರಾಜಯ್ಯ

ಅಧ್ಯಕ್ಷತೆ : ನ್ಯಾಯಮೂರ್ತಿಎ.ಜೆ. ಸದಾಶಿವ

ಇಂಡಿಯನ್ ಇನ್ಸ್‌ಟಿಟ್ಯೂಡ್ ಆಫ್ ವರ್ಲ್ಡ್ ಕಲ್ಚರ್ ಬೆಳಿಗ್ಗೆ 10.30

**08–01–2016 ಶುಕ್ರವಾರ**

ಕನ್ನಡ ಸಂಸ್ಕೃತಿದರ್ಶನ (ಸಾಕ್ಷ್ಯಚಿತ್ರ ಪ್ರದರ್ಶನ) ಸಂಜೆ. 6.00



**11–01–2016 ಸೋಮವಾರ**

ಅಕ್ಕರಗೊಟ್ಟಿ: 'ಶಾ. ಬಾಲೂರಾವ್ ಮಾತಿನ ಮನೆ'

ಜೈಮಿನ ಭಾರತದ ಮೂರು ಪದ್ಯಗಳ ಅರ್ಥಜಿಜ್ಞಾಸೆ ಸಂಜೆ .6.00

ಚರ್ಚೆಗೆ ಚಾಲನೆ : ಶ್ರೀ ವರದರಾಜಅಯ್ಯಂಗಾರ್

ಪುಟ 6 ರಲ್ಲಿ ಪದ್ಯವನ್ನು ಪ್ರಕಟಿಸಲಾಗಿದೆ



**19–01–2016 ಮಂಗಳವಾರ**

ವಚನವಿಹಾರ (ಸಂಗೀತಾತ್ಮಕ ಸಾಕ್ಷ್ಯಚಿತ್ರ) ಸಂಜೆ.6.00

**23–01–2016 ಶನಿವಾರ**

ದಿ॥ ಬಿ.ಎಸ್. ಗೋಪಾಲ ರಾವ್ ಮತ್ತು ಶ್ರೀಮತಿ ವೇದವತಿಬಾಯಿ

ದತ್ತಿ ಗಮಕ ವಾಚನ– ವ್ಯಾಖ್ಯಾನ ಶ್ರೀಮತಿ ಶೋಭಾ ಬೆಳಿಗ್ಗೆ 11.00

**24–01–2016 ಭಾನುವಾರ**

ಮೋಹನ್‌ದೇವ ಆಳ್ವಾ– ಡಾ. ಎಂ.ಕೆ. ಶೈಲಜಾ ದತ್ತಿ

ಹಿಂದೂಸ್ತಾನ ಗಾಯನ ಸ್ಪರ್ಧೆ

**ಬೆಳಿಗ್ಗೆ 10.30**

**28–01–2016 ಗುರುವಾರ**

ಕಣಕಟ್ಟೆ ಕೃಷ್ಣಮೂರ್ತಿ ರಾವ್ ದತ್ತಿ

ಕರ್ನಾಟಕ ಶಾಸ್ತ್ರೀಯ ಗಾಯನ

ಶ್ರೀಮತಿ ಸುಷ್ಮಾಸಂತೋಷ್

**ಸಂಜೆ 6.00**

**'ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)**

## ಅಕ್ಕರಗೊಟ್ಟಿ ಕಾರ್ಯಕ್ರಮ–3

(13–11–2015ಶುಕ್ರವಾರ)

ಸಂಜೆ 5:30 ರಿಂದ 7:30 ಶಾ. ಬಾಲೂರಾವ್ ಮಾತಿನ ಮಂಟಪ

ವಿಷಯ :**'ಕುಮಾರವ್ಯಾಸ ಭಾರತ'ದ ಎರಡು ಪದ್ಯಗಳ ಅರ್ಥಜಿಜ್ಞಾಸೆ ಚರ್ಚೆಗೆ ಚಾಲನೆ:** ಡಾ. ನಳಿನಿ ವೆಂಕಟೇಶ್

ಪಂಪಭಾರತದ 13ನೇ ಆಶ್ವಾಸದ ಪದ್ಯ– 7ಎ ಮತ್ತು ಮುಂದಿನ ಗದ್ಯಭಾಗಗಳ ಅರ್ಥಜಿಜ್ಞಾಸೆ



13–71 ಈ ಪದ್ಯದ ಹಿನ್ನೆಲೆಯು ಹೀಗಿದೆ.

ದುರ್ಯೋಧನ ಹಾಗೂ ಸಂಜಯರು ಯುದ್ಧಭೂಮಿಯಲ್ಲಿ ನಡೆದುಬರುತ್ತಿರುತ್ತಾರೆ. ಇಬ್ಬರೂ ಶರಶಯನರಾಗಿದ್ದ ಭೀಷ್ಮರನ್ನು ಭೇಟಿ ಮಾಡುತ್ತಾರೆ.ಅವರ ಸಲಹೆಯಂತೆ ಸಂಜಯನನ್ನು ಧೃತರಾಷ್ಟ್ರನ ಬಳಿಗೆ ಕಳುಹಿಸಿ, ದುರ್ಯೋಧನನು ಒಬ್ಬನೇ ವೈಷಂಪಾಯನ ಸರೋವರದ ಕಡೆಗೆ ಬರುತ್ತಾನೆ. ಹಾಗೆ ಅವನು ರಣರಂಗವನ್ನು ಹಾದು ಬರುತ್ತಿದ್ದಾಗ, ಆಗಿನ ರಣರಂಗದ ವರ್ಣನೆ ಈ ರೀತಿ ಇದೆ.

ಶಬ್ದ ಮಾಡುತ್ತಿರುವ ರಥಗಳಿಂದ ಹೊರಹೊರಟ ಸಹಸ್ರಾರು ಉರಿಯ ಜ್ವಾಲೆಗಳು ಮೇಲೆ ಹಾಯ್ದು, ಎಲ್ಲೆಲ್ಲಿಯೂ ಆವರಿಸಿಕೊಂಡು ಸುಡುತ್ತಿರಲು, ಎಲ್ಲೆಲ್ಲಿಯೂ ಬೇಯುತ್ತಿರುವ ಹೆಣದ ರಾಶಿಗಳನ್ನು ಚೆಕ್ ಮೊಕ್ ಎಂದು ಆಗ ಕತ್ತರಿಸಿ, ಭಯಂಕರ ಪಿಶಾಚ ಸಮೂಹವು ಕೈಯಿ ಬಾಯಿ ಸುಡುತ್ತಿರುವುದನ್ನು (ನೋಡಿದ) ದುಯೋಧನನ ಮನಸ್ಸಿಗೆ ಹೆದರಿಕೆಯುಂಟಾಯಿತು.

ನಗಿನಗಿ ಹೊಳೆಯುವ ಕೆಂಡದ ಮೇಲೆ, ಹಳೆಯ ಬೇವಿನೆಣ್ಣೆಯಲ್ಲಿ ತೊಯ್ದು ಬೆಳ್ಳುಳ್ಳಿಯ ವಾಸನೆಯು, ಗುಳ್ಳೆ ನರಿಯ ಬಾಯಲ್ಲಿ ಸುಡುತ್ತಿರುವ ಬೇಯುತ್ತಿರುವ ಹೆಣಗಳ ದುರ್ನಾಡತವನ್ನು ತಡೆದು ಕೊಳ್ಳಲಾರದೆ ದೊಡ್ಡ ಹೆಜ್ಜೆಯಿಂದ ಯುದ್ಧಭೂಮಿಯನ್ನು ದಾಟಿ ದೂರ ಹೋಗಿ, ಪ್ರಳಯ ಕಾಲದಿಂದ ಅಪ್ಪಳಿಸಲ್ಪಟ್ಟ ಎಂಟು ದಿಕ್ತ್ರದೇಶಗಳ ಕೀಲುಗಳ ಕಟ್ಟುಳ್ಳ ಆಕಾಶವೇ ಹರಿದು ಬಿದ್ದ ಹಾಗೆ (ಆದಿವರಾಹನು ಸಮುದ್ರದಲ್ಲಿ ಮುಳುಗಿದ ಭೂಮಂಡಲವನ್ನು ಎತ್ತಿ ತಂದಾಗ, ಆಕಾಶ ಮಂಡಲವೇ ಜಲದಿಂದ ಆವೃತವಾಗಿದೆಯೋ ಎಂಬಂತೆ)

ಈ ಪದ್ಯ ಹಾಗೂ ಗದ್ಯದಲ್ಲಿ ಪಂಪಕವಿಯು ವರ್ಣನೆಗಾಗಿ ವರ್ಣನೆಗಾಗಿ ವರ್ಣನೆಯನ್ನು ತರದೆ, ದುರ್ಯೋಧನನ ಮನಸ್ಥಿತಿಯನ್ನು ಯುದ್ಧರಂಗದ ಭೀಭತ್ಸ ವರ್ಣನೆಯೊಂದಿಗೆ ಮಿಳಿತಗೊಳಿಸಿ ದುಯೋಧನನ ಮನಸ್ಥಿತಿಯನ್ನು ಯುದ್ಧ ರಂಗದ ಭೀಭತ್ಸ ವರ್ಣನೆಯೊಂದಿಗೆ ಮಿಳಿತಗೊಳಿಸಿದ್ದಾನೆ. ಕಗ್ಗತ್ತಲೆಯಲ್ಲಿದ್ದಾಗ ಒಂದು ಮಿಣುಕು ದೀಪವೂ ಕಗ್ಗತ್ತಲೆಯಲ್ಲಿದ್ದಾಗ ಒಂದು ಮಿಣುಕು ದೀಪವೂ ಧೈರ್ಯಕೊಂಡುವಂತೆ, ಅದುವರೆಗೂ ಯುದ್ಧವೀರ ನಾಗದಿದ್ದರೂ ಸಂಜಯನು ದುರ್ಯೋನನನೊಂದಿಗೆ ಇದ್ದನು. ಭೀಷ್ಮರ ಸಲಹೆಯಂತೆ ಸಂಜಯನು ಧೃತರಾಷ್ಟ್ರನತ್ತ ಹೋಗಲು, ದುರ್ಯೋಧನನು ಏಕಾಂಗಿಯಾಗಿ ರಣರಂಗದ ಮೂಲಕ ಹಾದು ಹೋಗುತ್ತಿದ್ದನು. ಯುದ್ಧದ ಮೊದಲ ದಿನ ಭೀಷ್ಮ, ದ್ರೋಣ, ಕರ್ಣ, ದುಶ್ಶಾಸನ ಇತ್ಯಾದಿ ಎಲ್ಲರಿಂದಲೂ ಪರಿವೃತನಾದ ಕುರುಪತಿಯು, ಈಗ ಒಬ್ಬೊಬ್ಬರನ್ನಾಗಿ ಎಲ್ಲರನ್ನು ಕಳೆದುಕೊಂಡು, ಕೊನೆಯದಾಗಿ ಎಕೈಕನಾಗಿ ಉಳಿದಿದ್ದ ಸಂಜಯನೂ ದೂರವಾದ ಮೇಲೆ ಅಕ್ಷರಶಃ ಏಕಾಂಗಿಯಾದನು. ಅಲ್ಲಿಯವರೆಗೂ ಯುದ್ಧರಂಗವನ್ನು ನೋಡಿರಲಿಲ್ಲವೆಂದಲ್ಲ. ಹದಿನೇಳು ದಿನಗಳ ಯುದ್ಧವು ಮುಗಿದಿತ್ತು.ಸಂಜಯನೇ ವರ್ಣಿಸಿದ್ದನು. ಆದರೆ ದುರ್ಯೋಧನನಿಗೆ ಅದು ನೋಟಮಾತ್ರವಾಗಿತ್ತು. ಆದರೆ ಈಗ ಅವನು ಒಂಟಿಯಾಗಿ ನಡೆದು ಬರುತ್ತಿದ್ದಾಗ ಅವನ ಪ್ರಜ್ಞೆಗೆ ಧಾಳಿಯಿಟ್ಟಿತ್ತು.ಯುದ್ಧರಾಗದ ಒಂದೊಂದು ಕ್ರಿಯೆಯೂ ಅವನಲ್ಲಿ ಹೆದರಿಕೆಯನ್ನುಂಟು ಮಾಡಿತು.

ಅವನು ' ಕೋಳ್ದಾಂಟಿನೊಳ್'–ಹೆಣಗಳು ಬೇಯುತ್ತಿರುವ ನಾರುತ್ತಿರುವ ದುರ್ವಾಸನೆಯ ಹೊಡೆತದ ವ್ಯಾಪ್ತಿಯಿಂದ ತಪ್ಪಿಸಿಕೊಳ್ಳಲು ದಾಪುಗಾಲಿಕ್ಕೆ 'ಕೊಳುಗುಳಮಂಕೆ ದು' ಮುಂದೆ ಮುಂದೆ ಹೋದಾಗ, ಆ ವೈಷಂಪಾಯನ ಸರೋವರದ ವೈಶಾಲ್ಯತೆ ಹೀಗೆ ಕಾಣಿಸಿತು–"ಪ್ರಳಯ ಕಾಲದಿಂದ ಅಪ್ಪಳಿಸಲ್ಪಟ್ಟ ಎಂಟು ದಿಕ್ತ್ರದೇಶಗಳ ಕೀಲುಗಳ ಆಕಾಶವೇ ಹರಿದು ಬಿದ್ದಂತೆ" ಇತ್ತು.

ಹೆದರಿದ ದುರ್ಯೋಧನನ ಮನಸ್ಸಿಗೆ ಮೃತ್ಯುವೇ ಬಾಯ್ತೆರೆದು ನಂತಂತೆ ಇದು "ಪಾತಾಳ ಬಿಲಕ್ಕೆ ಬಾಗಿಲ್"ಎಂಬಂತೆ ವೈಷಂಪಾಯನ ಸರೋವರವಿತ್ತು.

ಈ ಬಗ್ಗೆಯ ಚರ್ಚೆಯು ತುಂಬ ಉಪಯುಕ್ತವಾಗಿ ಚಿಂತನೆಗಳ ಕಡೆತದಿಂದ ಹೊಸ ಆಲೋಚನೆಗಳಿಗೆ ಎಡೆಗೊಟ್ಟಿತು.ಚರ್ಚೆಯಲ್ಲಿ ಪ್ರೊ. ಅಶ್ವಥನಾರಾಯಣ, ,ಡಾ. ಜಯಮ್ಮ ಕರಿಯಣ್ಣ, ಡಾ.ಪಿ.ವಿ. ನಾರಾಯಣ, ಪ್ರೊ.ಅಬ್ದುಲ್ ಬಶೀರ್, ಶ್ರೀ ಗುರುಪ್ರಸಾದ್, ಶ್ರೀ ವರದರಾಜ ಐಯ್ಯಂಗಾರ್, ಪ್ರೊ.ಆರ್.ಲಕ್ಷ್ಮೀನಾರಾಯಣ, ಪ್ರೊ.ಗಣೇಶ್, ರವೀಂದ್ರನಾಥ್ ಮುಂತಾದವರು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

## 28–11–2015 ಶನಿವಾರ ಸಂಜೆ 6.ಕ್ಕೆ ಸರ್.ಸಿ.ವಿ ರಾಮನ್ ಸ್ಮಾರಕ ದತ್ತಿ ಉಪನ್ಯಾಸ

**ಉಪನ್ಯಾಸಕರು : ಡಾ. ಹಾಲ್ದೊಡ್ಡೇರಿ ಸುಧೀಂದ್ರ**

**ವಿಷಯ : ರಾಮನ್ ಬಿತ್ತಿದ ಬೀಜಗಳು– ನಿರಂತರ ಫಲ ನೀಡುವ ಹೆಮ್ಮರಗಳಾದ ಕಥೆ**

ಶ್ರೀಮತಿ ಬಿ.ಜಿ. ಕುಸುಮಾ ಸಾಮಾಜಿಕ ಸೇವಾ ಟ್ರಸ್ಟ್ ಸ್ಥಾಪಿಸಿರುವ ಮೊದಲ **ಸರ್.ಸಿ.ವಿ ರಾಮನ್ ಸ್ಮಾರಕ ಉಪನ್ಯಾಸವನ್ನು ಖ್ಯಾತ ವಿಜ್ಞಾನಿ ಹಾಗೂ ಅಲಿಯನ್ಸ್ ವಿಶ್ವವಿದ್ಯಾಲಯದ ಎಂಜಿನಿಯರಿಂಗ್ ಶಿಕ್ಷಣ ವಿಭಾಗದ ನಿರ್ದೇಶಕರಾದ** ಡಾ. ಹಾಲ್ದೊಡ್ಡೇರಿ ಸುಧೀಂದ್ರ ಅವರು ರಾಮನ್ ಬಿತ್ತಿದ ಬೀಜಗಳು– ನಿರಂತರ ಫಲ ನೀಡುವ ಹೆಮ್ಮರಗಳಾದ ಕಥೆ ಎಂಬ ವಿಷಯದ ಬಗ್ಗೆ ವಿದ್ವತ್ ಪೂರ್ಣ ಉಪನ್ಯಾಸವನ್ನು ನೀಡಿದರು. ಅವರು ಬಾಹ್ಯಾಕಾಶ ತಂತ್ರಜ್ಞಾನ ಕ್ಷೇತ್ರದಲ್ಲಿ ಭಾರತದ ಸಾಧನೆಗಳನ್ನು ಸವಿಸ್ತಾರವಾಗಿ ವಿವರಿಸಿ ಅದಕ್ಕೆ ಭದ್ರಬುನಾದಿ ಹಾಕಿಕೊಟ್ಟ ಸರ್ ಸಿವಿ ರಾಮನ್ ರವರ ಸಾಧನೆಗಳು ಹಾಗೂ ಅವರ ಮುಂದಾಲೋಚನೆಗಳ ಬಗ್ಗೆ ವಿಶ್ಲೇಷಣೆ ಮಾಡಿದರು.ನಂತರ





ಪ್ರೊ.ರಾಮಕೃಷ್ಣರಾವ್ ಅವರು ಸರ್ ಸಿವಿ ರಾಮನ್ ಅವರನ್ನು ಭೇಟಿ ಮಾಡಿದ ಬಗ್ಗೆ ಹಾಗೂ ತಮ್ಮ ವೈಯಕ್ತಿಕ ಅನುಭವವಗಳನ್ನು ಹಂಚಿಕೊಂಡರು.

ಡಾ. ಪಿ.ವಿ. ನಾರಾಯಣ ಅವರು ಸ್ವಾಗತವನ್ನು ಬಯಸಿ **ಸರ್.ಸಿ.ವಿ ರಾಮನ್ ಸ್ಮಾರಕ** ದತ್ತಿ ನಿಧಿ ಸ್ಥಾಪನೆಯ ಬಗ್ಗೆ ಹಾಗೂ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿದರು. ಪತ್ರಕರ್ತೆ ಶ್ರೀಮತಿ ಆರ್. ಪೂರ್ಣಿಮಾ ಅವರು ಶ್ರೀಮತಿ ಬಿ.ಜಿ. ಕುಸುಮಾ ಹಾಗೂ ಶ್ರೀಮತಿ ಬಿ.ಜಿ. ಕುಸುಮಾ ಸಾಮಾಜಿಕ ಸೇವಾ ಟ್ರಸ್ಟ್ ಬಗ್ಗೆ ವಿವರಗಳನ್ನು ನೀಡಿದರು. ಗೌರವ ಅಧ್ಯಕ್ಷರು: ಪ್ರೊ. ಎಂ.ಎಚ್. ಕೃಷ್ಣಯ್ಯ, ಉಪಸ್ಥಿತರಿದ್ದರು. ರವೀಂದ್ರನಾಥ್ ನಿರೂಪಣೆ ಮಾಡಿದರು.

### 4–12– 2015 ಶುಕ್ರವಾರ ಕನ್ನಡ ಸಂಸ್ಕೃತಿ ದರ್ಶನ ಸಾಕ್ಷ್ಯ ಚಿತ್ರ ಪ್ರದರ್ಶನ 'ಭಾಷಾ ಏಕೀಕರಣ'

ಕರ್ನಾಟಕ ಏಕೀಕರಣದ ಬಗ್ಗೆ ಐತಿಹಾಸಿಕ ಪುರಾವೆಗಳೊಂದಿಗೆ ಆಸಕ್ತಿದಾಯಕವಾಗಿ ಚಿತ್ರೀಕರಿಸಲಾದ ಸಾಕ್ಷ್ಯಚಿತ್ರ ಕರ್ನಾಟಕ ಭಾಷಾ ಏಕೀಕರಣದ ಹಿಂದಿನ ಗಾಥೆಯನ್ನು ಮನಮುಟ್ಟುವಂತೆ ವಿವರಿಸುತ್ತದೆ.ಏಕೀಕರಣವನ್ನು ಸಾಧಿಸುವ ಮುನ್ನ ಇದ್ದ ಪರಿಸ್ಥಿತಿಗಳು, ನಾಯಕರ ಪಾತ್ರಗಳು ಹಾಗೂ ತಪ್ಪಿ ಹೋದ ಅವಕಾಶಗಳು ಇತ್ಯಾದಿಗಳ ಬಗ್ಗೆ ಮಹತ್ವದ ಮಾಹಿತಿಗಳು ಸಭಿಕರಿಗೆ ಲಭ್ಯವಾದವು.

### ವಚನ ವಿಹಾರ
### ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ

ಸೋಮವಾರ 15–12–2015 ರಂದು ಸಂಜೆ ಆರು ಗಂಟೆಗೆ ವಚನ ವಿಹಾರ ಸಾಕ್ಷ್ಯ ಚಿತ್ರಗಳಲ್ಲಿ ಅಲ್ಲಮಪ್ರಭು ಹಾಗು ಸಿದ್ದರಾಮ ರಚಿಸಿದ ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು. ಸುಮಾರು ಒಂದು ಗಂಟೆಯ ಈ ಸಂಗೀತಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ, ಅಲ್ಲಮಪ್ರಭು ಹಾಗು ಸಿದ್ದರಾಮ ಅವರ ಪಾತ್ರದ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಳೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

## ಅಕ್ಕರಗೊಟ್ಟಿ ಕಾರ್ಯಕ್ರಮ 08-01-2016

ಲಕ್ಷ್ಮೀಶ ವಿರಚಿತ- ಕನ್ನಡ ಜೈಮಿನಿ ಭಾರತ

ಕೆಲವುಪದ್ಯಗಳ ಅರ್ಥಜಿಜ್ಞಾಸೆ

ಸಂಧಿ 21 : ಪದ್ಯಗಳು 3,26,61

ಚರ್ಚೆಗೆ ಚಾಲನೆ ನೀಡುವವರು : ಕೆ.ವಿ. ವರದರಾಜ ಅಯ್ಯಂಗಾರ್(9632461250)

ದೇವ ಬಿಡು ದೀಕ್ಷೆಯಂ ಕಾದು ನಡೆ ಕುಶನೊಳ್ ಮ।

ಹಾವೀರನಾತನಾ ಲವನಂದೆ ಬಲ್ಲಿದಂ।

ಜೀವಸಂದೇಹಮಾಗಿರ್ಪುದೈ ಶತ್ರುಘ್ನಲಕ್ಷ್ಮಣರ್ಗಖಿಳಸೇನೆ॥

ಭಾವಿಸೆ ತವಾಕೃತಿಯ ಬಾಲಕರ ದೆಸೆಯಿಂದೆ।

ಗೋವರ್ಧನಂಗೆ ಮೊಲೆಗೊಟ್ಟ ಪೂತನವೊಲಾ।

ಯ್ತೇವೇಳ್ವೆವೆಂದು ದೂತರ್ ನುಡಿಯೆ ರಾಘವಂ ಕೇಳಿ ಮೂರ್ಛಿತನಾದನು ॥3॥

ಶಿಶುಗಳಾಗಿಹ ನಮ್ಮೊಳೆನಗೆ ಕಾಳೆಗವೆ ಪರ।

ವಶರಾಗಿ ಬಿದ್ದನುಜರಂ ಕಂಡು ಖತಿಯೊಳಾಂ।

ವಿಶಿಖಮಂ ತೊಡುವೆನೆಂದೊಡೆ ಮನವೊಡಂಬಡದು ನಮ್ಮ ಜನನಸ್ಥಿತಿಗಳ॥

ವಿಶದ ವಿಸ್ತರವನೊರೆದೊಡೆ ನೋಡಿಕೊಳ್ವೆನೆನೆ।

ಕುಶನೆಂದನಂತು ಲೋಕಾನಂದಕರಮಾದ।

ನಶಿತವಾಕ್ಯಂಗಳಂ ಜನಮೇಜಯ ಕ್ಷಿತಿಪ ಕೇಳಾ ರಘೂದ್ವಹಂಗೆ ॥26॥

ಆರ ತನುಜಾತರೆಲೆ ಮಕ್ಕಳಿರ ನಮಗಿನತು।

ವೀರತ್ವಮೆತ್ತಣದು ಪೇಳ್ವುದೆಂದಾತ್ಮಜರ।

ನಾ ರಾಘವಂ ಕೇಳ್ದೊಡವರಾವು ಜಾನಕಿಯ ಗರ್ಭಸಂಭವರೆಮ್ಮನು॥

ಆರೈದು ವಾಲ್ಮೀಕಿಮುನಿ ಸಲಹಿ ಸಕಲವಿ।

ದ್ಯಾರಾಜಿಯಂ ಕಲಿಸಿದಂ ದೇವ ನನ್ನ ಪದ।

ವಾರಿಜಕೆ ದ್ರೋಹವುಂ ಮಾಡಿದೆವು ಸೈರಿಸುವುದೆಂದೆರಗಿದರ್ ಪದದೊಳು॥61॥

# ಶಾಶ್ವತ ನಿಧಿ

## ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ , ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದುಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ.

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ 2015 ರ ಸೆಪ್ಟೆಂಬರ್ ಹಾಗೂ ಅಕ್ಟೋಬರ್‌ತಿಂಗಳುಗಳಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:

ಶ್ರೀ ಜಿ.ವಿ. ಪ್ರಭಾಕರ್, ಶ್ರೀಮತಿ ಎಂ.ಜಿ. ವಾರಿ

ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 16.00 ಲಕ್ಷ

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

– ಡಾ.ಪಿ.ವಿ. ನಾರಾಯಣ

**ಆತ್ಮ**: 'ಅಮರಕೋಶ'ದಲ್ಲಿ "ಕ್ಷೇತ್ರಜ್ಞ ಆತ್ಮಾ ಪುರುಷಃ" ಎಂದಿದೆ; ಎಂದರೆ ಜೀವ ಎಂದು. "ಚೇತನಂ ಆತ್ಮಂ" ಎಂದು 'ಅಭಿಧಾನ ವಸ್ತುಕೋಶ'ದಲ್ಲಿ ಒಂದೆಡೆ, ಮತ್ತೊಂದೆಡೆ "ಮನದಿಡುವಟಿಂಯೊಳೆ ವರ್ತಿಕುವುನತಿಂದ್ರಿಯು ಗಣಮದಜಿಳೋಳಧಿಕೃತನಾತ್ಮಂ" (ಮನಸ್ಸಿಗನುಗುಣವಾಗಿ ವರ್ತಿಸುವ ಇಂದ್ರಿಯಗಳ ನಡುವೆ ಆತ್ಮವು ನೆಲಸಿದೆ). "ಏದೊರೆಯನಾತ್ಮನೆಂದೊಡೆ ಅನಾದಿ ಅನಂತಂ ನರತ್ನಯಂ ಚಿನ್ಮಯು ನಃಪ್ರಾದೇಶಿಕಂ" ಎಂದು ಜನ್ನನ 'ಯುಶೋಧ'ರಚರಿತೆ'ಯು ಆತ್ಮದ ಸ್ವರೂಪವನ್ನು ವಿವರಿಸುತ್ತದೆ.ಜೇಡರ ದಾಸಿಮಯ್ಯನ ವಚನದಲ್ಲಿನ "ಶರೀರದೊಳಗಾತ್ಮನ ನರರು ಕಾಣದಂತಿರಿಸಿದೆ" ಎಂಬಲ್ಲಿ ಸೃಷ್ಟಿಯ ಬಗೆಗಿನ ವಿಸ್ಮಯಭಾವವಿದೆ. "ಆತ್ಮವೆ ಲಿಂಗವೆಂಬರು, ಆತ್ಮನ ದೇಹರಹಿತವಾಗಿ ಕಾಬವರುಂಟೆ" ಎಂಬ ಬಸವಣ್ಣನ ಮಾತಿನಲ್ಲಿ ಪ್ರತಿ ವ್ಯಕ್ತಿಯಲ್ಲಿಯೂ ಇರುವ ಚೈತನ್ಯವನ್ನು 'ಆತ್ಮ' ಎಂದು ಕರೆಯುವಂತಿದೆ.ಜನ್ನನ 'ಯಶೋಧರ ಚರಿತೆ'ಯ "ಭೂತಚತುಷ್ಟಾವಯವದಿಂ ಅನನ್ಯಂ ಆತ್ಮನತಿಚೈತನ್ಯಂ" ಎಂಬಲ್ಲಿ ದೇಹವನ್ನೆಲ್ಲ ಆತ್ಮವು ವ್ಯಾಪಿಸಿರುತ್ತದೆ ಎಂಬರ್ಥವಿದೆ. ಆತ್ಮ–ದೇಹಗಳ ಸಂಬಂಧವನ್ನು ಬಿಬ್ಬಿ ಬಾಚಯ್ಯನೆಂಬ ವಚನಕಾರನು "ಆತ್ಮ ಘಟದಲ್ಲಿ ನಂದಿಹ ಭೇದ: ನೀರು ಮಣ್ಣಿನಂತೆ, ಬೇರು ಸಾರದಂತೆ, ಗಂಧ ತರುವಿನಂತೆ" ಎಂದು ವರ್ಣಿಸುತ್ತಾನೆ.

ಆತ್ಮ ಎಂಬ ಪದಕ್ಕೆ ಪರಮಾತ್ಮ ಎಂಬ ಅರ್ಥವೂ ಇದೆ: "ಇಂತು ಷಟ್ಸ್ಥಲವಾಗಿ ವಾಙ್ಮನಕ್ಕೆ ಅಗೋಚರವಾದ ಬ್ರಹ್ಮವೆ ಆತ್ಮನು" – ಅಲ್ಲಮಪ್ರಭು. ಆತನದೇ ಮತ್ತೊಂದು ವಚನದಲ್ಲಿ "ಆತ್ಮಸಂಗವಾದವರ್ಗೆ ಬಹಿರ್ಭಾವವಿಲ್ಲ" ಎನ್ನುತ್ತಾನೆ. ಆತ್ಮಸ್ವರೂಪವನ್ನು ತಿಳಿಯುವುದೇ 'ಆತ್ಮತತ್ವ': "ಆತ್ಮತತ್ತ್ವದೊಳ್ ಬಗೆ ಗಡಂ" – 'ಆದಿಪುರಾಣ'. ಆತ್ಮ–ಪರಮಾತ್ಮಗಳ ಸಂಬಂಧದ ಅರಿವೇ ಪ್ರಾಯಶಃ 'ಆತ್ಮವಿದ್ಯೆ'. "ಅನುಭಾವವೆಂಬುದು ಆತ್ಮವಿದ್ಯೆ" ಎಂದು ಸ್ವತಂತ್ರ ಸಿದ್ಧಲಿಂಗೇಶ್ವರನೆಂಬ ವಚನಕಾರನ ಹೇಳಿಕೆ ("ಕರಣಮಥನದಿಚ್ಛೆದೋರದಿಹುದೇ ಅನುಭಾವ" – ಚೆನ್ನಬಸವಣ್ಣ). ಆತ್ಮವನ್ನು ಆದಯ್ಯನೆಂಬೊಬ್ಬ ವಚನಕಾರನು ಸಮುದ್ರಕ್ಕೆ ಹೋಲಿಸುತ್ತಾನೆ: "ಆತ್ಮನೆಂಬ ಅಂಬುಧಿಯಲ್ಲಿ ನೊರೆ ತೆರೆ ತುಂತುರು ಸಾರ ಬುದ್ಬುದಂಗಳೆಂಬ, ತನು ಮನ ಶಬ್ದ ಸ್ಪರ್ಶ ರೂಪು ರಸ ಗಂಧ ಅಹಂಕಾರ ಮಮಕಾರಂಗಳಾದವಯ್ಯಾ." ತನಗೆ ಆತ್ಮದ ಸ್ವರೂಪ ತಿಳಿದಿದೆ ಎಂಬುವವರನ್ನು ಕುರಿತು ಉರಿಲಿಂಗಪೆದ್ದಿಯೆಂಬ ವಚನಕಾರನು "'ಆತ್ಮಾಹಂ' ಎಂಬರು ತಾವು ಆತ್ಮವಿತ್ತುಗಳಲ್ಲ; ಆತ್ಮನಂಥವನಂಥವನೆಂದು ಕಂಡವರುಂಟೆ ಅಯ್ಯ?" ಎಂದು ಪ್ರಶ್ನಿಸುತ್ತಾನೆ. ಆತ್ಮಜ್ಞಾನಯನ್ನು ಡಿವಿಜಿ 'ಆತ್ಮದರ್ಶನ' ಎನ್ನುತ್ತಾರೆ: "ದ್ವೈತವೇನದ್ವೈತವೇನಾತ್ಮದರ್ಶನಗೆ?" ಹೀಗೆ ಆತ್ಮನ ಬಗೆಗಿನ ಚರ್ಚೆಗೆ ಕೊನೆಯೇ ಇಲ್ಲ.

* * *

**ಆತ್ಮ**: ಆತ್ಮ ಎಂಬ ಪದಕ್ಕೆ ತಾನು ಎಂಬರ್ಥವು ವ್ಯಾಪಕವಾಗಿದ್ದು, ಅನೇಕ ಶಬ್ದಗಳಿಗೂ ಪರಿಕಲ್ಪನೆಗಳಿಗೂ ಎಡೆ ಮಾಡಿಕೊಟ್ಟಿದೆ. ಈ ಶಬ್ದಕ್ಕೆ ಈ ಅರ್ಥವು ಪ್ರಾಪ್ತವಾಗುವುದು ಇದು ಪೂರ್ವಪದವಾಗಿ ಸೇರುವ ಸಮಾಸಗಳಲ್ಲಿ. ಆತ್ಮಕೃತ್ಯ ಎಂದರೆ ತನ್ನ ಕೆಲಸ ಎಂದರ್ಥ: "ಆತ್ಮಕೃತ್ಯಪರಿಪಾಲನರಾದಮಿತಾರಿಯನ್ನರಾರ್" ಎಂಬುದು ಪೊನ್ನನ 'ಶಾಂತಿಪುರಾಣ'ದ ಮಾತು. ತನ್ನನ್ನು ತಾನು ಕಾಪಾಡಿಕೊಳ್ಳುವುದು 'ಆತ್ಮರಕ್ಷಣ': "ಆತ್ಮರಕ್ಷಣಮೇ ಪರಮಪುರುಷಾರ್ಥಮೆಂಬ ಸರ್ವಜನಸಮ್ಮತಮಂ" ಎಂಬುದು 'ಪಂಚತಂತ್ರ'ದ ಮಾತು. 'ಆತ್ಮಗತ' ಎಂದರೆ ತನಗೆ ತಾನೇ ಹೇಳಿಕೊಳ್ಳುವುದು (ಸ್ವಗತ): "ತಜ್ಜರದ್ವಾನರಂ ಹರ್ಷೋತ್ಕರ್ಷಚಿತ್ತನಾಗಿ ಆತ್ಮಗತದೊಳಿಂತೆಂದಂ." – 'ಪಂಚತಂತ್ರ'. 'ಆತ್ಮಘಾತ' ಎಂದರೆ ತನ್ನನ್ನು ತಾನು ಕೊಂದುಕೊಳ್ಳುವುದು (ಆತ್ಮಹತ್ಯೆ): "ಮೇಲೆ ಕೂಡುವರ್ ಒಡಸತ್ತವರ್ ಎಂಬೊಡೆ ಅದು ಕೂಡದು ಕೇವಲಂ ಆತ್ಮಘಾತದೋಷವೆ ಪೆಜಿತಲ್ಲ" □ 'ಕರ್ಣಾಟಕ ಕಾದಂಬರಿ'. ಆತ್ಮದ ತೇಜಸ್ಸನ್ನು ಕುವೆಂಪು ಆತ್ಮಜ್ವಾಲೆ ಎನ್ನುತ್ತಾರೆ: "ಆತ್ಮಜ್ವಾಲೆಯ ದಳ್ಳುರಿ ಹೊತ್ತಿ .. .. ಮಿಥ್ಯೆಯ ದಹಿಸುತ ಮುಕ್ಕುತಿದೆ".ಹೀಗೆಯೇ ಆತ್ಮಗೌರವ, ಆತ್ಮಾಭಿಮಾನ, ಆತ್ಮದಂಡನೆ, ಆತ್ಮಸಾಕ್ಷಾತ್ಕಾರ, ಆತ್ಮಜ್ಞಾನ, ಆತ್ಮಚರಿತ್ರೆ ಮುಂತಾದ ಅಸಂಖ್ಯ ಸಮಾಸಗಳು ಸೃಷ್ಟಿಯಾಗಿವೆ.

ಈ ಶಬ್ದದಿಂದ ಇತರ ಕೆಲವು ಶಬ್ದಗಳೂ ಸಾಧಿತವಾಗಿವೆ. ಆತ್ಮಜ ಎಂದರೆ ಮಗ [ತನ್ನಿಂದ ಹುಟ್ಟಿದವನು]: "ಮನದೊಳ್ ಪಿರಿದುಮುತ್ಸಾಹಮಂ ಪಡೆದಳಾತ್ಮಜರ ಬರವಿಂದೆ" – 'ಸುಕುಮಾರ ಚರಿತೆ'. ಆತ್ಮಜನ್ಮ ("ಗಂಗಾತ್ಮಜನ್ಮಂ ಜಯಶ್ರೀಲೋಲಂ" – 'ಪಂಪಭಾರತ') ಮತ್ತು 'ಆತ್ಮಜಾತ' ("ಜಯಶ್ಯಾಮೆಗೆ ಇನ್ನು ಆತ್ಮೋದ್ಭವಮೆಂದಕ್ಕುಂ" □ 'ಅನಂತನಾಥ ಪರಾಣ') ಎಂದರೂ ಮಗನೇ.ಹಾಗೆಯೇ ಆತ್ಮಜೆ, ಆತ್ಮಜಾತೆ ಎಂದರೆ ಮಗಳು. ಮಗ ಹುಟ್ಟುವ ಸಂತೋಷವನ್ನು 'ಆದಿಪುರಾಣ'ವು 'ಆತ್ಮಜನೊಸಗೆ' ಎನ್ನುತ್ತದೆ: "ಮಾದೇವಿಗಾದ ಆತ್ಮಜನೊಸಗೆಯನಾ .. ..ಬಿನ್ನಪಂಗೆಯ್ದಿರೆ". 'ಆತ್ಮೀಯ' ಎಂದರೆ ತನಗೆ ಪ್ರಿಯವಾದವನು ಎಂದರ್ಥ: "ಅವರ ವಚನದಿಂ ಆತ್ಮೀಯ ಪಿತೃಮರಣಮುಮಂ ಆತನ ನರಕಗತಿಗಮನಮುಂ ಅಜಿದು" – 'ಆದಿಪುರಾಣ'. ಈ ಶಬ್ದಕ್ಕೆ 'ಅಭಿಧಾನ ವಸ್ತುಕೋಶ'ವು ಹತ್ತಿರದ ಬಂಧು ಎಂಬರ್ಥವನ್ನೂ ಕೊಡುತ್ತದೆ:

### ಗೃಹ ಸಾಲ

ಬಿ.ಎಂ.ಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಶ್ರೀ. ರವೀಂದ್ರನಾಥ್ ರಚಿಸಿರುವ "ಗೃಹಸಾಲ –ಸಮಗ್ರ ಮಾಹಿತಿ ಕೈಪಿಡಿ" ಪುಸ್ತಕ ಈಚೆಗೆ ಬೆಂಗಳೂರಿನ ನವ ಕರ್ನಾಟಕ ಪ್ರಕಾಶನದಿಂದ ಲೋಕಾರ್ಪಣೆ ಆಗಿದೆ.

**Date of Posting : 30-12-2015**
**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**

### 2015 ಡಿಸೆಂಬರ್ ತಿಂಗಳಿನಲ್ಲಿ(20ರ ವರೆಗೆ) ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ಡಿಸೆಂಬರ್ ತಿಂಗಳಿನಲ್ಲಿ 9 ಗ್ರಂಥಗಳ ಶುಷ್ಕ ಶುದ್ಧೀಕರಣ, 23 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಮತ್ತು ಸ್ಕಾನ್ ಮಾಡಲು ಸಿದ್ಧಪಡಿಸಿರುವುದು, 14ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು. ಈ ಎಲ್ಲಾ ಕೆಲಸಗಳನ್ನು ಮಾಡಿದೆ.

ಪ್ರತಿಷ್ಠಾನದ ಸಂಗ್ರಾಹಲಕ್ಕೆ ಇತ್ತೀಚೆಗೆ ಸ್ವೀಕೃತವಾಗಿರುವ ಕೆಲವು ಗ್ರಂಥಗಳಲ್ಲಿ ಪತ್ರಗಳು ಅಸ್ತವ್ಯಸ್ತವಾಗಿರುವದರಿಂದ, ಗ್ರಂಥಗಳನ್ನು ಪರಿಶೀಲಿಸಿ ಪತ್ರಗಳ ಪುನರ್‌ಜೋಡಣೆ ಕಾರ್ಯವನ್ನು ಕೈಗೆತ್ತಿ ಕೊಳ್ಳಲಾಗಿದೆ.

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. ೨೦/ – ಆಗಿದ್ದು ಐದು ವರ್ಷಗಳ ಚಂದಾ ಹಣ ರೂ, ೧೦೦/– ಮಾತ್ರ.

ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath



**ಅಚ್ಚಾದ ಪುಸ್ತಕ**

ತೆರೆದ–ಅಂಚೆ

*ಶ್ರೀಮತಿ/ಶ್ರೀ*..........................................................................

..........................................................................

..........................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭